# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 316
ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನ ಕುಮಾರ್
ಉತ್ತರಿಸುವ ದಿನಾಂಕ : 06.03.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪ್ರತಿ ವರ್ಷ ಡಿಸೆಂಬರ್ 3ರಂದು ಅಂಗವಿಕಲರ ದಿನಾಚರಣೆಯನ್ನು ಸರ್ಕಾರ ಆಚರಿಸುತ್ತಿರುವುದು ನಿಜವೇ; | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ವತಿಯಿಂದ ಪ್ರತಿ ವರ್ಷ ಡಿಸೆಂಬರ್ 03 ರಂದು ವಿಶ್ವ ವಿಕಲಚೇತನರ ದಿನಾಚರಣೆಯನ್ನು ಸರ್ಕಾರದ ವತಿಯಿಂದ ಆಚರಿಸಲಾಗುತ್ತಿದೆ. |
| ಆ | ಹಾಗಿದ್ದಲ್ಲಿ, ಅಂಗವಿಕಲರುಗಳು ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದಲ್ಲಿ, ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು) | ವಿಕಲಚೇತನರು ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದಿಲ್ಲ. |
| ಇ | ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ರೂ.11,500ಕ್ಕೆ ನಿಗಧಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದು ಇಂದಿನ ಕಾಲಕ್ಕೆ ಪ್ರಸ್ತುತವೇ: ಸರ್ಕಾರ ಅಂಗವಿಕಲರ ನೆರವಿಗೆ ಯಾವ ರೀತಿ ಕಾರ್ಯಕ್ರಮ ರೂಪಿಸಿದೆ; (ವಿವರ ನೀಡುವುದು) | ಅಂಗವಿಕಲ ವ್ಯಕ್ತಿಗಳಿಗೆ ಆರೋಗ್ಯ, ಶಿಕ್ಷಣ, ವಸತಿ ಇಲಾಖೆಗಳಿಂದ ಅನೇಕ ಸೌಲಭ್ಯಗಳನ್ನು ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಸಾಧನ ಸಲಕರಣೆಗಳನ್ನು ಒದಗಿಸಲಾಗುತ್ತಿದ್ದು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ವಾರ್ಷಿಕ ಆದಾಯ ಗ್ರಾಮೀಣ ಪ್ರದೇಶದಲ್ಲಿ ರೂ.12,000/- ಹಾಗೂ ಪಟ್ಟಣ ಪ್ರದೇಶದಲ್ಲಿ ರೂ.17,000/-ಗಳನ್ನು ಹೊಂದಿರುವ ಮತ್ತು ಶೇಕಡ 40ಕ್ಕಿಂತ ಹೆಚ್ಚಿನ ಅಂಗವಿಕಲತೆ ಇರುವ ವ್ಯಕ್ತಿಗಳಿಗೆ ಅವರ ಜೀವನ ನಿರ್ವಹಣೆಗಾಗಿ ಮಾಸಿಕ ಪಿಂಚಣಿಯನ್ನು ನೀಡಲಾಗುತ್ತಿದೆ. |
| ಈ | ಪೋಷಕರ ವರಮಾನದ ಮಿತಿ ಏರಿಕೆಯಾಗದೇ ಯಾವುದೇ ಸವಲತ್ತುಗಳ ಫಲ ಪಡೆಯಲು ಅಂಗವಿಕಲರಿಗೆ ಸಾಧ್ಯವಾಗದಿರುವುದರಿಂದ ಸರ್ಕಾರ ಈ ಬಗ್ಗೆ ತಕ್ಷಣ ಕ್ರಮ ಕೈಗೊಳ್ಳುವುದೇ? | ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಬಿ.ಪಿ.ಎಲ್ ಕಾರ್ಡ್ ಆಧಾರದ ಮೇಲೆ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಕೆಲವೊಂದು ಯೋಜನೆಗಳಲ್ಲಿ ಆದಾಯ ಮಿತಿ ಇರುವುದಿಲ್ಲ ವಿವರಗಳ ಈ ಕೆಳಕಂಡಂತಿದೆ. |

| ಕ್ರ.ಸಂ | ಯೋಜನೆ ಹೆಸರು | ವಿವರ |
|---|---|---|
| 1 | ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ | ಆದಾಯ ಮಿತಿ ಇರುವುದಿಲ್ಲ. |
| 2 | ಎಸ್.ಎಸ್.ಎಲ್.ಸಿ ಹಾಗೂ ನಂತರದ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ವಿತರಣೆ, | ಆದಾಯ ಮಿತಿ ಇರುವುದಿಲ್ಲ. |

| ಕ್ರ.ಸಂ | ಯೋಜನೆ ಹೆಸರು | ವಿವರ |
|---|---|---|
| 3 | ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, | ಆದಾಯ ಮಿತಿ ಇರುವುದಿಲ್ಲ. |
| 4 | ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ | ಆದಾಯ ಮಿತಿ ಇರುವುದಿಲ್ಲ. |
| 5 | ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಬಹುಮಾನ | ಆದಾಯ ಮಿತಿ ಇರುವುದಿಲ್ಲ. |
| 6 | ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ | ಆದಾಯ ಮಿತಿ ಇರುವುದಿಲ್ಲ. |
| 7 | ಸಾಧನೆ ಮತ್ತು ಪ್ರತಿಭೆ | ಆದಾಯ ಮಿತಿ ಇರುವುದಿಲ್ಲ. |
| 8 | ಅಂಗವಿಕಲರಿಗೆ ಮಾಸಿಕ ನಿರ್ವಹಣೆ ಭತ್ಯೆ | ಗ್ರಾಮೀಣ ಪ್ರದೇಶದಲ್ಲಿ ರೂ.12,000/- ನಗರ ಪ್ರದೇಶದಲ್ಲಿ ರೂ.17,000/- |
| 9 | ಸಾಧನ ಸಲಕರಣೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |
| 10 | ತೀವ್ರತರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನ ನೀಡುವುದು | ಕುಟುಂಬದ ವಾರ್ಷಿಕ ಆದಾಯ ರೂ.2.00 ಲಕ್ಷಗಳಿಗಿಂತ ಕಡಿಮೆಯಿರಬೇಕು |
| 11 | ಸ್ವಯಂ ಉದ್ಯೋಗಕ್ಕಾಗಿ ಆಧಾರ ಯೋಜನೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |
| 12 | ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯ ವ್ಯಕ್ತಿಗಳು ವಿವಾಹವಾದಲ್ಲಿ ಪ್ರೋತ್ಸಾಹ ಧನ | ವಿಕಲಚೇತನ ವ್ಯಕ್ತಿಗಳೊಡನೆ ವಿವಾಹವಾಗುವ ಸಾಮಾನ್ಯ ವ್ಯಕ್ತಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ. |
| 13 | ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳ ಪಾಲನೆಗೆ ಶಿಶು ಪಾಲನಾ ಭತ್ಯೆ | ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಗಳ ಒಳಗಿರಬೇಕು |
| 14 | ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ-ತಾಯಿ/ಪೋಷಕರಿಗೆ ವಿಮಾ ಯೋಜನೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |

**ಸಂಖ್ಯೆ: ಮಮಇ 38 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ
ಇಲಾಖಾ ಸಚಿವರು